

**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 28
ಸದಸ್ಯರ ಹೆಸರು : ಶ್ರೀ. ಎಸ್.ಎಲ್.ಭೋಜೇಗೌಡ
ಉತ್ತರಿಸುವ ದಿನಾಂಕ : 07/12/2020
ಉತ್ತರಿಸುವ ಸಚಿವರು : ಮಾನ್ಯ ಸಮಾಜ ಕಲ್ಯಾಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಒಟ್ಟು ಹಾಸ್ಟೆಲ್‌ಗಳ ಸಂಖ್ಯೆ ಎಷ್ಟು ಮತ್ತು ಅವುಗಳಲ್ಲಿ ವಾಸವಿರುವ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು; | ರಾಜ್ಯದಲ್ಲಿ ಸಮಾಜ ಕಲ್ಯಾಣ ಇಲಾಖಾ ವತಿಯಿಂದ 1233 ಮೆಟ್ರಿಕ್ ಪೂರ್ವ ಹಾಗೂ 634 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ನಿರ್ವಹಿಸಲಾಗುತ್ತಿರುತ್ತದೆ.<br><br>ದಿನಾಂಕ:17-11-2020 ರಿಂದ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲಾಗಿರುತ್ತದೆ. ಈ ವಿದ್ಯಾರ್ಥಿನಿಲಯಗಳಲ್ಲಿ ವಿದ್ಯಾರ್ಥಿಗಳ ಪ್ರವೇಶ ಪ್ರಕ್ರಿಯೆ ನಡೆಯುತ್ತಿದ್ದು, ಇಲ್ಲಿಯವರೆವಿಗೆ 4222 ವಿದ್ಯಾರ್ಥಿಗಳು ದಾಖಲಾಗಿರುತ್ತಾರೆ.<br><br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ 136 ಮೆಟ್ರಿಕ್ ಪೂರ್ವ 119 ಮೆಟ್ರಿಕ್ ನಂತರದ ಒಟ್ಟು 255 ವಿದ್ಯಾರ್ಥಿ ನಿಲಯಗಳು ಕಾರ್ಯನಿರ್ವಹಿಸುತ್ತಿವೆ. 2019-20ನೇ ಸಾಲಿನಲ್ಲಿ ಒಟ್ಟು 23908 ವಿದ್ಯಾರ್ಥಿಗಳು ದಾಖಲಾಗಿರುತ್ತಾರೆ. |
| ಆ) | ರಾಜ್ಯದಲ್ಲಿರುವ ಹಲವು ವಿದ್ಯಾರ್ಥಿ ನಿಲಯಗಳು ಸುಧಾರಣೆ ಕಾಣದೇ ದುಸ್ಥಿತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿದ್ಯಾರ್ಥಿ ನಿಲಯಗಳಲ್ಲಿ ಕಾಲಕಾಲಕ್ಕೆ ಅವಶ್ಯಕ ಸುಧಾರಣೆಗಳಾದ ಕಟ್ಟಡ ದುರಸ್ಥಿ, ಹೆಚ್ಚುವರಿ ಕೊಠಡಿ, ಶೌಚಾಲಯ, ಸ್ನಾನ ಗೃಹ ಹಾಗೂ ವಿದ್ಯಾರ್ಥಿನಿಲಯಕ್ಕೆ ಬೇಕಾಗಿರುವ ಅವಶ್ಯಕ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತಿದೆ. |
| ಇ) | ಪ್ರಸ್ತುತ ಕೋವಿಡ್-19 ಸನ್ನಿವೇಶದಿಂದಾಗಿ ವಿದ್ಯಾರ್ಥಿನಿಲಯಗಳು ಖಾಲಿ ಇದ್ದು, ಇವುಗಳ ಸುಧಾರಣೆಗೆ ಸರ್ಕಾರ ಕೈಗೊಂಡ ಕ್ರಮಗಳೇನು; ಯಾವ ರೀತಿಯ ಕ್ರಮಗಳನ್ನು ಕೈಗೊಂಡಿದೆ; (ಪೂರ್ಣ ವಿವರ ನೀಡುವುದು) | ಪ್ರಸ್ತುತ ಕೋವಿಡ್-19 ಸನ್ನಿವೇಶದಿಂದಾಗಿ ವಿದ್ಯಾರ್ಥಿನಿಲಯಗಳಲ್ಲಿ ಕ್ವಾರಂಟೈನ್‌ಗೆ ಬಳಸಿದ ಇಲಾಖೆಯ ವಿದ್ಯಾರ್ಥಿ ನಿಲಯಗಳನ್ನು SOP (Standard Operating Procedure) ವಿಧಾನಗಳನ್ನು ಪಾಲಿಸಿ ಕ್ರಮವಹಿಸಿ ವಿದ್ಯಾರ್ಥಿಗಳ ವಾಸ್ತವ್ಯಕ್ಕೆ ಯೋಗ್ಯಗೊಳಿಸಲು ಸಿದ್ಧಪಡಿಸಲಾಗಿರುತ್ತದೆ.<br><br>ವಿದ್ಯಾರ್ಥಿನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಉತ್ತಮ ಪೌಷ್ಟಿಕಾಂಶವುಳ್ಳ ಆಹಾರ ಪದಾರ್ಥಗಳನ್ನು ಆಯಾ ವಿಭಾಗದ ಆಹಾರ ಪದ್ಧತಿಗೆ ಅನುಗುಣವಾಗಿ ಮೆನು ಚಾರ್ಟ್ ತಯಾರಿಸಿ ಊಟ ಉಪಹಾರಗಳನ್ನು ನೀಡಲು ಕ್ರಮವಹಿಸಲಾಗಿದೆ ಹಾಗೂ ವಿದ್ಯಾರ್ಥಿಗಳಿಗೆ ಅಗತ್ಯವಾದ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಕ್ರಮವಹಿಸಲಾಗುತ್ತಿದೆ. |
| ಈ) | ವಿದ್ಯಾರ್ಥಿಗಳು ಹಾಸ್ಟೆಲ್‌ಗಳಲ್ಲಿ ಮನೆಯ ವಾತಾವರಣವನ್ನು ಕಾಣುವಂತೆ ಮಾಡಲು ಸರ್ಕಾರವು ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ? (ವಿವರ ನೀಡುವುದು) | |

ಸಕಇ 462 ಪಕವಿ 2020

(ಬಿ. ಶ್ರೀರಾಮುಲು)
ಮಾನ್ಯ ಸಮಾಜ ಕಲ್ಯಾಣ ಸಚಿವರು.